Lat RIPL

N/07

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು: | ಶ್ರೀ ಆರ್. ಧರ್ಮಸೇನ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 851 |
| ಉತ್ತರಿಸ ಬೇಕಾದ ದಿನಾಂಕ: | 11.03.2020 |
| ಉತ್ತರಿಸುವ ಸಚಿವರು | ವಿ. ಸೋಮಣ್ಣ, ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜೀವ ಗಾಂಧಿ ಗ್ರಾಮೀಣ ವಸತಿ ನಿಗಮದ ವತಿಯಿಂದ ಯಾವ ಯಾವ ವಸತಿ ಯೋಜನೆಗಳನ್ನು ಜಾರಿಗೆ ತರಲಾಗುತ್ತಿದೆ: | ಸರ್ಕಾರವು ರಾಜೀವ್ ಗಾಂಧಿ ವಸತಿ ನಿಗಮದ ಮೂಲಕ ಈ ಕೆಳಕಂಡ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>ರಾಜ್ಯ ಸರ್ಕಾರದ ಯೋಜನೆಗಳು:<br>1. ಬಸವ ವಸತಿ ಯೋಜನೆ<br>2. ಡಾ.ಬಿ.ಆರ್.ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ ಮತ್ತು ನಗರ)<br>3. ವಾಜಪೇಯಿ ನಗರ ವಸತಿ ಯೋಜನೆ<br>4. ಮುಖ್ಯಮಂತ್ರಿಗಳ ಒಂದು ಲಕ್ಷ ಬಹುಮಹಡಿ ಬೆಂಗಳೂರು ವಸತಿ ಯೋಜನೆ<br>5. ದೇವರಾಜ್ ಅರಸು ವಸತಿ ಯೋಜನೆ (ಗ್ರಾಮೀಣ ಮತ್ತು ನಗರ)<br>ಕೇಂದ್ರ ಪುರಸ್ಕೃತ ಯೋಜನೆಗಳು:<br>1. ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ ಮತ್ತು ನಗರ). |
| (ಆ) | ಅನುದಾನದ ಕೊರತೆಯಿಂದ ಈ ವಸತಿ ಯೋಜನೆಗಳ ಪ್ರಗತಿ ಕುಂಠಿತವಾಗಿ ಗ್ರಾಮೀಣ ಜನರಿಗೆ ವಸತಿಗಳು ಸಿಗುವುದು ಕಷ್ಟವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಜುಲೈ-2019ರ ಅಂತ್ಯದವರೆಗೆ ಪ್ರಗತಿಗೆ ತಕ್ಕಂತೆ ಅನುದಾನವನ್ನು ಬಿಡುಗಡೆಗೊಳಿಸಲಾಗಿದ್ದು, ತದನಂತರ ಭೌತಿಕ ಪ್ರಗತಿಗೆ ಅನುಗುಣವಾಗಿ ಬಿಡುಗಡೆ ಮಾಡಲು ಬಾಕಿ ಇರುವ ಮನೆಗಳಿಗೆ ಸರ್ಕಾರಿ ಆದೇಶದಂತೆ ವಸತಿ ವಿಜಿಲ್ ಆಪ್ ಮುಖಾಂತರ ಜಿ.ಪಿ.ಎಸ್ ಗೆ ಅಳವಡಿಸಿ ಅರ್ಹ ಫಲಾನುಭವಿಗಳಿಗೆ ಪ್ರತಿ ವಾರವೂ ಅನುದಾನ ಬಿಡುಗಡೆ ಮಾಡಲು ರಾಜೀವ್ ಗಾಂಧಿ ವಸತಿ ನಿಗಮದಿಂದ ಕ್ರಮ ವಹಿಸಲಾಗುತ್ತಿದೆ. |
| (ಇ) | ನೆರೆಹಾವಳಿ ಮುಂತಾದ ಪ್ರಕೃತಿ ವಿಕೋಪಗಳಿಂದ ವಸತಿ ಹೀನರಾದವರಿಗೆ ಮತ್ತು ಇತರ | 2019ರ ಆಗಸ್ಟ್, ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳಿನಲ್ಲಿ ಕರ್ನಾಟಕ ರಾಜ್ಯದಲ್ಲಿ ಬಿದ್ದಂತಹ ಮಹಾ ಮಳೆಗೆ ಹಾಗೂ ಮಹಾರಾಷ್ಟ್ರ ರಾಜ್ಯದಲ್ಲಿನ ಕೃಷ್ಣ ಕಣಿವೆ ಜಲಾಶಯಗಳು ತುಂಬಿ ಹರಿದ ನೀರಿನಿಂದ ರಾಜ್ಯದ ಉತ್ತರ |

ವಸತಿ ಹೀನರಿಗೆ ವಸತಿ ಸೌಕರ್ಯ ಕಲ್ಪಿಸಲು ಸರ್ಕಾರ ತ್ವರಿತಗತಿಯಲ್ಲಿ ಹೆಚ್ಚಿನ ಅನುದಾನ ಒದಗಿಸುವುದೇ ?

ಕರ್ನಾಟಕದ ಹಲವು ಭಾಗಗಳಲ್ಲಿ ಪ್ರವಾಹ ಉಂಟಾಗಿ ನದಿಯ ಅಕ್ಕಪಕ್ಕದ ಪ್ರದೇಶಗಳಿಗೆ ನೀರು ತುಂಬಿ ಅಪಾರ ಪ್ರಮಾಣದ ಜೀವಹಾನಿ ಮತ್ತು ಬೆಳೆಹಾನಿ ಹಾಗೂ ಸಾರ್ವಜನಿಕ ಆಸ್ತಿ ಹಾನಿಯಾದ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯು ರಾಜ್ಯದ 25 ಜಿಲ್ಲೆಗಳಡಿ ಬರುವ 120 ತಾಲ್ಲೂಕು/ನಗರಗಳನ್ನು ಪ್ರವಾಹ ಪೀಡಿತ ಪ್ರದೇಶಗಳೆಂದು ಘೋಷಿಸಿ ಆದೇಶ ಹೊರಡಿಸಿದೆ.

ಪ್ರವಾಹದಿಂದ ತೀವ್ರ ಹಾಗೂ ಭಾಗಶಃ ಮನೆ ಹಾನಿಯಾದ ಸಂತ್ರಸ್ಥರಿಗೆ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಶೇ.15ರಷ್ಟು ಹಾನಿಯ ಮನೆಗೆ ರೂ. 5200 ಹಾಗೂ ತೀವ್ರ ಹಾಗೂ ಭಾಗಶಃ ಮನೆ ಹಾನಿಗೆ ರೂ. 95,100/- ನಿಗದಿಪಡಿಸಿದ್ದು, ರಾಜ್ಯ ಸರ್ಕಾರವು ಸದರಿ ಮೊತ್ತವನ್ನು ಹೆಚ್ಚಿಸಿ ಈ ಕೆಳಕಂಡಂತೆ ಪರಿಹಾರ ಪಾವತಿಸಲಾಗುತ್ತಿದೆ.

| ವರ್ಗ | ಮನೆ ಹಾನಿಯ ಪ್ರಮಾಣ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|
| ಎ ವರ್ಗ | ಸಂಪೂರ್ಣ ಹಾನಿಗೊಳಗಾದ ಮನೆ<br>(ಶೇ.75ರಿಂದ 100ರಷ್ಟು ಹಾನಿ)<br>ಮನೆಯ ಪುನರ್ ನಿರ್ಮಾಣಕ್ಕಾಗಿ | 5,00,000/- |
| ಬಿ ವರ್ಗ | ಭಾಗಶಃ ಹಾನಿಗೊಳಗಾದ ಮನೆ<br>(ಶೇ.26ರಿಂದ 75ರಷ್ಟು ಹಾನಿ)<br>ಮನೆಯನ್ನು ರಿಪೇರಿ ಮಾಡಿಕೊಂಡಲ್ಲಿ<br>ಮನೆಯನ್ನು ಪುನರ್ ನಿರ್ಮಾಣಮಾಡಿಕೊಂಡಲ್ಲಿ | 3,00,000/-<br>5,00,000/- |
| ಸಿ ವರ್ಗ | ಅಲ್ಪಸ್ವಲ್ಪ ಹಾನಿಗೊಳಗಾದ ಮನೆ<br>(ಶೇ.15ರಿಂದ 25ರಷ್ಟು ಹಾನಿ) | 50,000/- |

ಇತರ ವಸತಿ ಹೀನರಿಗೆ ವಸತಿ ಸೌಕರ್ಯ ಕಲ್ಪಿಸಲು ಸರ್ಕಾರವು ಆಧ್ಯತೆಯ ಮೇರೆಗೆ ಅನುದಾನದ ಲಭ್ಯತೆಯ ಆಧಾರದ ಮೇಲೆ ಕ್ರಮ ಜರುಗಿಸಲಾಗುವುದು.

ವ ಇ 86 ಹೆಚ್‌ಎಂ 2020

(ವಿ.ಸೋಮಣ್ಣ)
ವಸತಿ ಸಚಿವರು